# ಮಕ್ಕಳಿಗೆ ಭಾವನೆಗಳನ್ನು ವ್ಯಕ್ತಪಡಿಸಲು ನೆರವಾಗುವ ಕಥೆ ಪುಸ್ತಕಗಳು

ಮೆಲೊಡಿ ಝೂಲ್ಕೊ

ಇಂದು ಕಲಿಕಾ ಕೇಂದ್ರದಲ್ಲಿ ಲಾಲಿಯು ಸುಮ್ಮನೆ ಕುಳಿತಿದ್ದಳು. ಆಕೆಗೆ ಓದಲು ಇಚ್ಛೆ ಇರಲಿಲ್ಲ. ಇತರ ಮಕ್ಕಳು ಆಕೆಯ ಬಳಿ ಮಾತನಾಡಲು ಇಚ್ಛಿಸುತ್ತಿದ್ದರು. ಆದರೆ ಆಕೆ ಪ್ರತಿಕ್ರಿಯಿಸಲಿಲ್ಲ ಹಾಗೂ ಬೇಸರದಿಂದ ಇರುವಂತೆ ಕಂಡಳು. ಕೇಂದ್ರವು ಮುಚ್ಚುವ ವೇಳೆಗೆ ಎಲ್ಲ ಮಕ್ಕಳು ಮನೆಗೆ ಹೋಗಲು ಸಿದ್ಧರಾದರು. ಲಾಲಿ ಸಹ ತನ್ನ ಪುಸ್ತಕಗಳನ್ನು ಚೀಲದಲ್ಲಿ ಹಾಕಿಕೊಂಡು ಕೇಂದ್ರದಿಂದ ಹೊರನಡೆಯಲು ತಯಾರಾದಳು. ನಾನು ಆಕೆಯ ಬಳಿ ಹೋಗಿ ಆಕೆಯ ಕೈ ಹಿಡಿದುಕೊಂಡೆ. ಆಕೆ ಒಂದು ಕ್ಷಣ ನಿಂತು ನನ್ನತ್ತ ಅಚ್ಚರಿಯಿಂದ ನೋಡಿದಳು. 'ನಿನಗೆ ಏನಾಯಿತು ಲಾಲಿ? ಬೇಸರವಾಗಿದೆಯೇ' ಎಂದು ನಾನು ಕೇಳಿದೆ. ಆಕೆ ಏನೂ ಹೇಳಲಿಲ್ಲ. ನಾನು ಆಕೆಗೆ ಮತ್ತೆ ಕೇಳಿದೆ: 'ಲಾಲಿ, ನನಗೆ ನೀನು ಮುಕ್ತವಾಗಿ ಹೇಳಬಹುದು, ನಿನಗೆ ಏನಾಗಿದೆ? ಯಾರಾದರೂ ಏನಾದರೂ ಅಂದರೆ?' ಆಕೆಯ ಕಣ್ಣುಗಳಿಂದ ಕಣ್ಣೀರು ಸುರಿಯಲು ಆರಂಭಿಸಿತು. ನನ್ನನ್ನು ನೋಡಿದ ಆಕೆಯು, 'ಕಾಂಚನ್ ಮತ್ತು ನಾನು ಯಾವಾಗಲೂ ಒಟ್ಟಿಗೆ ಶಾಲೆಗೆ ಬರುತ್ತಿದ್ದೆವು. ಕೆಲವು ದಿನಗಳಿಂದ ಅವಳು ನನ್ನ ಜೊತೆ ಸರಿಯಾಗಿ ಮಾತನಾಡುತ್ತಿಲ್ಲ. ಆಕೆಗೆ ಈಗ ಹೊಸ ಗೆಳತಿ ಸಿಕ್ಕಿದ್ದಾಳೆ. ಕೆಲವೊಮ್ಮೆ, ನನ್ನನ್ನು ನೋಡಿ ಅವರಿಬ್ಬರೂ ಮಾತನಾಡುವಾಗ, ಅವರು ನನ್ನ ಬಗ್ಗೆಯೇ ಮಾತನಾಡುತ್ತಿದ್ದಾರೆ ಎಂದು ನನಗೆ ಅನಿಸುತ್ತದೆ. ನನಗೆ ಅಳು ಬರುತ್ತದೆ. ನಾನು ಅಮ್ಮನ ಹತ್ತಿರ ಹೋದರೆ ಆಕೆ ಕೆಲಸದಲ್ಲಿ ಮತ್ತು ನನ್ನ ತಂಗಿಯ ಆರೈಕೆಯಲ್ಲಿ ನಿರತಳಾಗಿರುತ್ತಾಳೆ' ಎಂದಳು. ಒಬ್ಬ ಶಿಕ್ಷಕಿಯಾಗಿ ನನ್ನ ವಿದ್ಯಾರ್ಥಿಗಳ ಅಗತ್ಯಗಳು, ಅವರ ಸಾಮಾಜಿಕ – ಭಾವನಾತ್ಮಕ ಸ್ಥಿತಿಗತಿ, ಅವರ ಭೀತಿ, ಕಳವಳ ಇತ್ಯಾದಿಗಳನ್ನು ಅರಿತುಕೊಳ್ಳಬೇಕಾದುದು ನನ್ನ ಜವಾಬ್ದಾರಿಯಾಗಿದೆ. ಇಂದು ನಾನು ಒಂದು ಕಥೆ ಪುಸ್ತಕದ ಕುರಿತು ಮಕ್ಕಳೊಂದಿಗೆ ಚರ್ಚೆ ನಡೆಸುತ್ತಿದ್ದಾಗ, ಅನೇಕ ವಿಷಯಗಳು ಮುನ್ನೆಲೆಗೆ ಬಂದವು. ಅದನ್ನು ನಿಮ್ಮ ಜೊತೆಗೆ ಹಂಚಿಕೊಳ್ಳಲು ಇಚ್ಛಿಸುತ್ತೇನೆ.

ಇಂದು ಮೊಹಲ್ಲಾ ಕಲಿಕಾ ಚಟುವಟಿಕೆ ಕೇಂದ್ರದಲ್ಲಿ (MohLAC)i, ಶೇಖರ ದತ್ತಾತ್ರಿ ಅವರು ಬರೆದ 'ನನ್ನಾ ಹಾಥಿ ಲಾಯಿ-ಲಾಯಿ' ಪುಸ್ತಕದ ಕುರಿತು ಚರ್ಚೆ ಇತ್ತು. 'ಆ ಚಿಕ್ಕ ಆನೆಮರಿ ಹುಟ್ಟಿ ಕೇವಲ ಒಂದು ದಿನ ಆಗಿತ್ತು. ಅದಕ್ಕೆ ತಾನಾಗಿಯೇ ಎದ್ದು ನಿಲ್ಲಲು ಮತ್ತು ನಡೆಯಲು ಸಾಧ್ಯವಾಗುತ್ತಿತ್ತು. ಅದರ ತಾಯಿಯು ಎಲ್ಲೆಲ್ಲ ಹೋಗುತ್ತಿದ್ದಳೋ, ಅದೂ ಅಲ್ಲೆಲ್ಲ ಆಕೆಯ ಹಿಂದೆಯೇ ಹೋಗುತ್ತಿತ್ತು' ಎಂದು ಓದಿದೆ. 'ಆದರೆ ಮನುಷ್ಯರಿಗೆ ಜನಿಸಿದ ಶಿಶುಗಳು ಹುಟ್ಟಿದ ತಕ್ಷಣವೇ ಯಾಕೆ ನಡೆಯಲು ಆಗುವುದಿಲ್ಲ' ಎಂದು ಮಕ್ಕಳನ್ನು ಕೇಳಿದೆ. 'ಈ ಶಿಶುಗಳ ಕಾಲುಗಳು ದುರ್ಬಲವಾಗಿದ್ದು ಅವರಿಗೆ ಹಿರಿಯರ ನೆರವು ಬೇಕು' ಎಂದು ಮಕ್ಕಳು ಉತ್ತರಿಸಿದರು ಮತ್ತು ಮುಂದುವರಿದು: 'ನಾವು ಅಳುವಾಗ, ಸ್ನಾನ ಮಾಡುವಾಗ ಅಥವಾ ಬಟ್ಟೆ ಬದಲಾಯಿಸುವಾಗ ಯಾರಾದರೂ ವ್ಯಕ್ತಿಯ ಸಹಾಯ ಬೇಕು' ಎಂದರು. 'ಈಗಲೂ ನಿಮಗೆ ಅಂತಹ ನೆರವಿನ ಅಗತ್ಯವಿದೆ ಎಂದು ಅನಿಸುತ್ತದೆಯೇ?' ಎಂದು ನಾನು ಪುನಃ ಕೇಳಿದೆ. 'ಹೌದು' ಎಂದು ಮಕ್ಕಳು ಉತ್ತರಿಸಿದರು.

ಇದು ನನ್ನನ್ನು ಯೋಚನೆಗೆ ಈಡು ಮಾಡಿತು. ಲಾಲಿಗೆ ಕಾಂಚನ್ನ ಸಹಾಯ ಬೇಕಿತ್ತು. ಏಕೆಂದರೆ ಆಕೆಯ ವಯಸ್ಸಿನಲ್ಲಿ, ತನ್ನ ಮನಸ್ಸಿನಲ್ಲಿ ಇರುವುದೆಲ್ಲವನ್ನು ಹಂಚಿಕೊಳ್ಳಬಹುದಾದ ಮತ್ತು ಆಕೆಯು ನಂಬಿಕೆ ಇಡಬಹುದಾದ ಗೆಳತಿಯ ಅಗತ್ಯವಿತ್ತು. ಗೆಳೆಯರ ಜೊತೆಗೆ ಸಮಯ ಕಳೆಯುವುದರಿಂದ ಬದುಕಿನಲ್ಲಿ ಅವರು ಹೊಸ ವಿಷಯಗಳನ್ನು ಅನ್ವೇಷಣೆ ಮಾಡಬಹುದು. ತಾವು ಭಾವನಾತ್ಮಕವಾಗಿ ಎಲ್ಲಿ ತೊಡಗಿಸಿಕೊಳ್ಳಬಹುದೋ ಅಲ್ಲಿ ಮಕ್ಕಳು ಗೆಳೆತನವನ್ನು ಕಾಪಾಡುವುದಕ್ಕೆ ಬದ್ಧತೆ ತೋರುತ್ತಾರೆ. ಕಾಂಚನ್, ಲಾಲಿಯ ಪಾಲಿಗೆ ಏಕೈಕ ಗೆಳತಿಯಾಗಿದ್ದಳು. ಲಾಲಿಗೆ ಬೇಸರವಾಗಿತ್ತು ಹಾಗೂ ಚಿಂತೆಗೀಡಾಗಿದ್ದಳು: ಆಕೆ ಏಕಾಂಗಿಯಾಗಿ ಹೇಗೆ ಶಾಲೆಗೆ ಬರುತ್ತಾಳೆ? ಆಕೆ ಯಾರ ಜೊತೆಗೆ ಕುಳಿತುಕೊಳ್ಳುತ್ತಾಳೆ? ಆಕೆ ಯಾರ ಜೊತೆಗೆ ಊಟ ಮಾಡುತ್ತಾಳೆ ಮತ್ತು ಯಾರ ಜೊತೆಗೆ ಮೋಜು ಅನುಭವಿಸುತ್ತಾಳೆ? ತನ್ನ ಗೆಳತಿಯಿಂದಲೇ ತಾನು ತಿರಸ್ಕೃತಗೊಂಡಿದ್ದೇನೆ ಎಂಬಂತೆ ಆಕೆಗೆ ಭಾಸವಾಯಿತು. ಆಕೆಯನ್ನು ತಿರಸ್ಕರಿಸಲು ಕಾಂಚನ್ಳಾವುದೇ ಕಾರಣವನ್ನು ಕೊಟ್ಟಿರಲಿಲ್ಲ. ಹೀಗಾಗಿ ಈ ತಿರಸ್ಕಾರವನ್ನು ಸ್ವೀಕರಿಸುವುದು ಆಕೆಯ ಪಾಲಿಗೆ ಕಷ್ಟದ ಕೆಲಸವಾಗಿತ್ತು. ತಿರಸ್ಕಾರದ ಭಾವನೆಯು ಮಕ್ಕಳ ಭಾವನಾತ್ಮಕ ಬೆಳವಣಿಗೆಯನ್ನು ಬಾಧಿಸುತ್ತದೆ ಮಾತ್ರವಲ್ಲದೆ ಅವರ ಮಾನಸಿಕ, ಬೌದ್ಧಿಕ ಮತ್ತು ಸಂಜ್ಞಾನಾತ್ಮಕ / ಅರಿವಿನ ಬೆಳವಣಿಗೆಯ ಮೇಲೆ ಪರಿಣಾಮ ಬೀರುತ್ತದೆ.'ಲಾಯಿ-ಲಾಯಿ ನೀರಿನಲ್ಲಿ ಆಟವಾಡುವುದನ್ನು ಇಷ್ಟಪಡುತ್ತದೆ. ಆದರೆ ಅಮ್ಮ ಮಾತ್ರ ಹತ್ತಿರವೇ ನಿಲ್ಲಬೇಕು. ಅದು ಯಾವಾಗಲೂ ತನ್ನ ತಾಯಿ ಮತ್ತು ಚಿಕ್ಕಮ್ಮಂದಿರ ಪಕ್ಕದಲ್ಲೇ ನಿಲ್ಲುತ್ತದೆ' ಎಂದು ನಾನು ಓದಿದೆ ಹಾಗೂ 'ಯಾಕೆ ಲಾಯಿ-ಲಾಯಿ ತಾಯಿ ಅಥವಾ ಚಿಕ್ಕಮ್ಮಂದಿರ ಪಕ್ಕದಲ್ಲೇ ನಿಲ್ಲಬೇಕು' ಎಂದು ಮಕ್ಕಳನ್ನು ಕೇಳಿದೆ. 'ಹೆದರಿಕೆಯ ಕಾರಣದಿಂದಾಗಿ' ಎಂದು ಮಕ್ಕಳು ಉತ್ತರಿಸಿದರು. ಯಾವುದರ ಹೆದರಿಕೆ ಎಂದು ನಾನು ಮತ್ತೆ ಕೇಳಿದೆ. 'ಅದಕ್ಕೆ ನೀರಿನಲ್ಲಿ ಮುಳುಗುವ ಹೆದರಿಕೆ ಇರಬಹುದು ಅಥವಾ ಅದು ಒಂದೇ ಇರುವಾಗ ದೊಡ್ಡ ಪ್ರಾಣಿಯೊಂದು ದಾಳಿ ಮಾಡುವ ಹೆದರಿಕೆ ಇರಬಹುದು ಅಥವಾ ಗುಡುಗು – ಮಿಂಚು ಅಥವಾ

ಕತ್ತಲೆಯ ಹೆದರಿಕೆ ಇರಬಹುದು' ಎಂದು ಮಕ್ಕಳು ಹೇಳಿದರು. 'ನಿಮಗೆ ಯಾವುದರ ಹೆದರಿಕೆ ಇದೆ?' ಎಂದು ನಾನು ಅವರನ್ನು ಕೇಳಿದೆ. ಅವರಿಗೆ ಹೆದರಿಕೆ ಉಂಟು ಮಾಡುವ ವಿಷಯಗಳ ಪಟ್ಟಿಯನ್ನು ನಾವು ಮಾಡಿದೆವು. ಚರ್ಚೆಯ ಉದ್ದೇಶಕ್ಕಾಗಿ ನಾನು ಅವರ ಎರಡು ಹೆದರಿಕೆಗಳ ಕುರಿತು ಮಾತನಾಡಲು ಇಚ್ಛಿಸುತ್ತೇನೆ:

- ಪರೀಕ್ಷೆಗಳ ಹೆದರಿಕೆ: ತನಗೆ ಪರೀಕ್ಷೆಗಳ ಹೆದರಿಕೆ ಇದೆ ಎಂದು ಒಬ್ಬ ವಿದ್ಯಾರ್ಥಿಯು ಹೇಳಿದ. ಅದಕ್ಕೆ ಇತರರು ತಮಗೆ ಕೆಲವು ಪ್ರಶ್ನೆಗಳು ಅರ್ಥವಾಗದೆ ಇರುವ ಕಾರಣ ಅಥವಾ ಶಿಕ್ಷಕಿಯು ಅವರ ಹತ್ತಿರಕ್ಕೆ ಬಂದಾಗ ಅವರಿಗೆ ಹೆದರಿಕೆಯಾಗುತ್ತದೆ ಎಂದು ದನಿಗೂಡಿಸಿದರು. ಪರೀಕ್ಷೆಯಲ್ಲಿ ಅನುತ್ತೀರ್ಣರಾಗುವ ಕುರಿತು ತಮಗೆ ಹೆದರಿಕೆ ಇರುವುದಾಗಿಯೂ, ಇದರಿಂದಾಗಿ ತಾವು ತಮ್ಮ ಗೆಳೆಯರನ್ನು ಕಳೆದುಕೊಳ್ಳಬೇಕಾದೀತು ಅಥವಾ ಗೆಳೆತನವನ್ನು ಮುರಿಯುವಂತೆ ಅವರ ಗೆಳೆಯರ ಪೋಷಕರು ಹೇಳಬಹುದು ಎಂದು ಅವರು ಹೇಳಿದರು. ನೆರೆಹೊರೆಯ ಜನರು ತಮ್ಮ ಕುರಿತು ತಮಾಷೆ ಮಾಡಬಹುದು ಎಂಬ ಕುರಿತು ಸಹ ಅವರಿಗೆ ಹೆದರಿಕೆ ಇತ್ತು.

- ಕುಡುಕ ತಂದೆಯ ಹೆದರಿಕೆ: ಐದನೇ ತರಗತಿಯ ಹುಡುಗಿಯೊಬ್ಬಳು ಹೀಗೆ ಹೇಳಿದಳು, 'ಅಕ್ಕಾ, ನನ್ನ ತಂದೆ ಕುಡಿದು ಮನೆಗೆ ಬಂದಾಗ ನನಗೆ ಹೆದರಿಕೆಯಾಗುತ್ತದೆ. ಕೆಲವೊಮ್ಮೆ ಅವರು ತಾಯಿಯೊಂದಿಗೆ ಜಗಳ ಮಾಡುತ್ತಾರೆ. ಅವರು ತಾಯಿಗೆ ಹೊಡೆಯುತ್ತಾರೆ ಕೂಡಾ. ಆಗ ನಾವು ಮಕ್ಕಳು ಮೂಲೆಯಲ್ಲಿ ಅಡಗಿ ಕುಳಿತುಕೊಳ್ಳುತ್ತೇವೆ.' ಹುಡುಗಿಯು ನನಗೆ ಇದನ್ನು ಹೇಳುವಾಗ, ಆಕೆಯ ಮುಖವು ಚಿಂತೆಯಿಂದ ಸೊರಗಿ ಹೋಗಿತ್ತು. ತಮ್ಮ ಸ್ವಂತ ಮನೆಯಲ್ಲೇ ಸ್ತಂಭೀಭೂತರಾದ ಮತ್ತು ಅಸುರಕ್ಷಿತ ಭಾವನೆಯನ್ನು ಹೊಂದಿರುವ ಎಷ್ಟು ಮಕ್ಕಳು ಅಲ್ಲಿದ್ದರು ಎಂಬುದು ನನಗೆ ತಿಳಿದಿಲ್ಲ. ತಮ್ಮ ಭೀತಿ ಮತ್ತು ಅಗತ್ಯಗಳನ್ನು ತಮ್ಮ ತಂದೆಯ ಮುಂದಿಡಲು ಮಕ್ಕಳಿಗೆ ಸಾಧ್ಯವಾಗದೆ ಇರುವಾಗ, ಅವರೊಂದಿಗೆ ಮುಕ್ತವಾಗಿ ಮಾತನಾಡಲು ಅಸಾಧ್ಯವೆನಿಸಿದಾಗ, ನಿಧಾನವಾಗಿ ಸಂಬಂಧವು ಹಳಸಿ ಹೋಗುತ್ತದೆ.

ಈ ಸಂವಾದದ ನಂತರ ಒಂದು ವಿಷಯ ನನಗೆ ಸ್ಪಷ್ಟವಾಯಿತು. ಮಕ್ಕಳೊಂದಿಗೆ ನಾವಿದ್ದರೂ, ಅವರು ಸಾಕಷ್ಟು ಭಾವನಾತ್ಮಕ ಕ್ಷೋಭೆಯನ್ನು ಎದುರಿಸಬೇಕಾಗುತ್ತದೆ. ಅಂದರೆ ಗೆಳೆತನವನ್ನು ಆಧರಿಸಿ ಅವರೊಂದಿಗೆ ಸಂಬಂಧವನ್ನು ರೂಪಿಸುವುದು ನಮಗೆ ಅಸಾಧ್ಯವೆನಿಸುತ್ತದೆ. ನಮ್ಮನ್ನು ಭೇಟಿಯಾಗಿ ಅವರ ಸಮಸ್ಯೆಗಳನ್ನು ನಮ್ಮೊಂದಿಗೆ ಹಂಚಿಕೊಳ್ಳುವ ಮುಕ್ತತೆ ಅವರಲ್ಲಿ ಇರುವುದಿಲ್ಲ. ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವ ಎಲ್ಲರಿಗೆ ಹಾಗೂ ನನ್ನ ಶಿಕ್ಷಕ ಸಹೋದ್ಯೋಗಿಗಳಿಗೆ ಒಂದು ಮಾತನ್ನು ಹೇಳಲು ನಾನು ಇಚ್ಛಿಸುತ್ತೇನೆ. ಶಾಲೆಯಲ್ಲಿ ಮಕ್ಕಳು ನಮ್ಮ ಜೊತೆಗೆ ಸಾಕಷ್ಟು ಸಮಯವನ್ನು ಕಳೆಯುವುದರಿಂದ ಅವರ ಮಾನಸಿಕ ಆರೋಗ್ಯಕ್ಕೂ ನಾವು ಗಮನ ನೀಡಬೇಕು. ಯಾವುದೇ ಹಿಂಜರಿಕೆ ಇಲ್ಲದೆ ಅವರು ನಮ್ಮನ್ನು ತಲುಪುವಂತಾಗಲು ಅವರೊಂದಿಗೆ ನಿಕಟ ಸಂಬಂಧವನ್ನು ರೂಪಿಸಿಕೊಳ್ಳಬೇಕು. ಅಲ್ಲದೆ ತರಗತಿಯಲ್ಲಿ ಹಾಗೂ ಹೊರಗಡೆ ಸ್ನೇಹಮಯ ಪರಿಸರವನ್ನು ರೂಪಿಸಿಕೊಳ್ಳುವುದು ಅಗತ್ಯ. ಒಂದು ವೇಳೆ ಮಗುವಿಗೆ ನಮ್ಮೊಂದಿಗೆ ನೇರವಾಗಿ ಮಾತನಾಡಲು ಆಗದೆ ಇದ್ದಲ್ಲಿ, ಆತನು/ಆಕೆಯು ತನ್ನ ಸಮಸ್ಯೆಗಳನ್ನು ಡೈರಿ ಅಥವಾ ಪತ್ರದ ಮೂಲಕ ತಾನು ಎದುರಿಸುತ್ತಿರುವ ಸಮಸ್ಯೆಗಳು ಮತ್ತು ಭಾವನೆಗಳನ್ನು ಹಂಚಿಕೊಳ್ಳಬಹುದು. ನಾವು ಇದಕ್ಕೆ ಉತ್ತೇಜನ ನೀಡಬೇಕು. ಲಾಲಿ ಏಕೆ ಬೇಸರದಿಂದ ಇದ್ದಾಳೆ ಎಂದು ನಾನು ಕೇಳದೆ ಇದ್ದಲ್ಲಿ, ಈ ಏಕಾಂಗಿತನದ ಭಾವನೆ ಆಕೆಯನ್ನು ಕಾಡುತ್ತಿತ್ತು. ಕೆಲವೊಮ್ಮೆ ಏಕಾಂಗಿತನವು ಮಕ್ಕಳಲ್ಲಿ ಭೀತಿ, ಮುಜುಗರ ಅಥವಾ ಅಭದ್ರತೆಯ ಭಾವನೆಯನ್ನುಂಟು ಮಾಡಬಹುದು ಹಾಗೂ ಅವರ ಕಲಿಕೆ ಮತ್ತು ಬೆಳವಣಿಗೆಗೆ ಅಡ್ಡಿಯನ್ನುಂಟು ಮಾಡಬಹುದು.

ಮಕ್ಕಳೊಂದಿಗೆ ಭಾವನಾತ್ಮಕ ವಿಚಾರಗಳನ್ನು ಚರ್ಚೆ ಮಾಡಲು ಕಥೆ ಪುಸ್ತಕಗಳು ಅವಕಾಶಗಳನ್ನು ಒದಗಿಸುತ್ತವೆ. ತಾವೊಬ್ಬರೇ ಈ ಭೀತಿ, ಏಕಾಂಗಿತನ ಅಥವಾ ಪ್ರತ್ಯೇಕತೆಯನ್ನು ಅನುಭವಿಸುವುದಿಲ್ಲ. ಬದಲಾಗಿ ಇತರ ಮಕ್ಕಳು ಸಹ ಇದೇ ರೀತಿಯ ಭಾವನೆಗಳನ್ನು ಹೊಂದಿದ್ದಾರೆ ಎಂಬುದನ್ನು ಈ ಕಥೆಗಳು ಮಕ್ಕಳಿಗೆ ಮನವರಿಕೆ ಮಾಡಿಕೊಡುತ್ತವೆ. ಬಂಬು, ಗುಟ್ಲಿ ತೊ ಪಡಿ ಹೈ, ಮಾಚೆರ್ಝೋಲ್, ಜಮ್ಲೊ, ಮೇರಿ ಜೋಯಾ ಚಲೀ ಗಯಿ, ಪ್ಯಾರಿ ಮೇಡಮ್ ಇತ್ಯಾದಿ ಪುಸ್ತಕಗಳು ಮಕ್ಕಳ ಬೇರೆಬೇರೆ ಭಾವನೆಗಳನ್ನು ವಿವರಿಸುತ್ತವೆ. ಉದಾಹರಣೆಗೆ, ರಿಚಾ ಝಾ ಅವರ 'ಮೇರಿ ಜೋಯಾ ಚಲೀ ಗಯಿ' ಪುಸ್ತಕವು, ಕಥೆಯ ಪಾತ್ರದ ಸಹೋದರಿಯಾಗಿರುವ ಜೋಯಾಳು ಮರಣವನ್ನಪ್ಪಿದಾಗ ಪಾತ್ರವು ಅನುಭವಿಸುವ ಏಕಾಂಗಿತನವನ್ನು ಚಿತ್ರಿಸುತ್ತದೆ. ರಿಂಚಿನ್ ಅವರ 'ಪ್ಯಾರಿ ಮೇಡಂ' ಪುಸ್ತಕದಲ್ಲಿ, ಪುಟ್ಟ ಹುಡುಗಿಯು ಆಕೆಯ ಸಂತಸ, ಸಮಸ್ಯೆಗಳು, ಉತ್ಸಾಹ, ದುಃಖದುಮ್ಮಾನಗಳ ಕುರಿತು ಬರೆಯುತ್ತಾಳೆ ಮಾತ್ರವಲ್ಲದೆ ಪತ್ರಗಳ ಮೂಲಕ ತನ್ನ ಶಿಕ್ಷಕಿಗೆ ಕೇಳುವ ಚಮತ್ಕಾರಿ ಪ್ರಶ್ನೆಗಳನ್ನು ಸಹ ನಾವು ಗಮನಿಸಬಹುದು.

*ಮಕ್ಕಳ ಗುರುತನ್ನು ಮರೆಮಾಚುವ ಉದ್ದೇಶದಿಂದ ಹೆಸರುಗಳನ್ನು ಬದಲಾಯಿಸಲಾಗಿದೆ

## ಅಡಿ ಟಿಪ್ಪಣಿಗಳು

i ಮೊಹಲ್ಲಾ ಕಲಿಕಾ ಚಟುವಟಿಕೆ ಕೇಂದ್ರಗಳೆಂದರೆ (MohLAC) ಸರ್ಕಾರಿ ಪ್ರಾಥಮಿಕ ಶಾಲೆಗಳ ಮಕ್ಕಳು ಮೂಲಭೂತ ಭಾಷಾ ಮತ್ತು ಗಣಿತವನ್ನು ಅಭ್ಯಾಸ ಮಾಡಬಹುದಾದ ಕೇಂದ್ರಗಳಾಗಿವೆ. ಕೋವಿಡ್– 19ರ ಅವಧಿಯಲ್ಲಿ ಶಾಲೆಗಳನ್ನು ಮುಚ್ಚಿದ್ದ ವೇಳೆ, ಏಕಲವ್ಯದ ಜಶ್ನ್–ಇ–ತಾಲೀಮ್ ಯೋಜನೆಯು, ಹೋಶಂಗಾಬಾದ್ ಜಿಲ್ಲೆಯ ಆರು ಅಭಿವೃದ್ಧಿ ಕ್ಷೇತ್ರಗಳ ಕೆಲವು ಗ್ರಾಮಗಳಲ್ಲಿ ಈ ಕೇಂದ್ರಗಳನ್ನು ತೆರೆಯಿತು ಹಾಗೂ ಮಕ್ಕಳಿಗೆ ಕಲಿಸುವ ಪ್ರಕ್ರಿಯೆಯನ್ನು ಪ್ರಾರಂಭಿಸಿತು. ಈ ಕೇಂದ್ರಗಳು ಈಗಲೂ ಬೋಧನೆಯನ್ನು ಮುಂದುವರಿಸಿವೆ. ಭಾಷೆ ಮತ್ತು ಗಣಿತವನ್ನು ಕಲಿಸುವ ಜೊತೆಗೆ ಇವು ಗ್ರಂಥಾಲಯ / ವಾಚನಾಲಯಗಳನ್ನು ಹೊಂದಿದ್ದು, ಇಲ್ಲಿ ಕಥೆ ಹೇಳುವುದು, ಪುಸ್ತಕಗಳ ಮೇಲಿನ ಚರ್ಚೆ ಮತ್ತು ಇತರ ಚಟುವಟಿಕೆಗಳನ್ನು ನಡೆಸಲಾಗುತ್ತದೆ.

## ಪರಾಮರ್ಶನ:

*Lightfoot, C., Cole, M., & Cole, S. R. (2009). Chapter 13: Social and emotional development in middle childhood. In Development of Children (pp. 465-503). Worth Publishers: USA*



**ಮೆಲೊಡಿ ಝೂಲ್ಕೊ** ಅವರು ಮಧ್ಯಪ್ರದೇಶದ ಹೋಶಂಗಾಬಾದ್ ಜಿಲ್ಲೆಯ ಪಿಪರಿಯಾ ಕ್ಷೇತ್ರದಲ್ಲಿ ಏಕಲವ್ಯ ಸಂಸ್ಥೆಯ ಪ್ರಾಜೆಕ್ಟ್ ಅಸಿಸ್ಟಂಟ್ ಆಗಿದ್ದಾರೆ. ಅವರು ಬೆಂಗಳೂರಿನ ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದಿಂದ ಶಿಕ್ಷಣದಲ್ಲಿ ಎಂಎ ಮತ್ತು ಕೋಲ್ಕತಾದ ಸೇಂಟ್ ಕ್ಸೇವಿಯರ್ ಕಾಲೇಜಿನಿಂದ ಬಿ.ಎ. ಪದವಿಯನ್ನು ಪಡೆದಿದ್ದಾರೆ. ಪ್ರಕೃತಿ ಶಿಕ್ಷಣ ಮತ್ತು ಮಕ್ಕಳ ಸಾಹಿತ್ಯವನ್ನು ಚರ್ಚಿಸುವುದು ಇವರ ಆಸಕ್ತಿಯ ಕ್ಷೇತ್ರಗಳಾಗಿವೆ. ಇವರಿಗೆ ವರ್ಣಚಿತ್ರ ಮತ್ತು ರೇಖಾಚಿತ್ರ ಬಿಡಿಸುವುದು ಇಷ್ಟ. ಶಿಕ್ಷಣವು ತನ್ನನ್ನು ತಾನು ಅರಿತುಕೊಳ್ಳಲು ಸಹಾಯ ಮಾಡುತ್ತದೆ ಮತ್ತು ಸ್ವಾತಂತ್ರ್ಯದ ಕೀಲಿಕೈ ಆಗಿದೆ ಎಂದು ಅವರು ನಂಬುತ್ತಾರೆ. ಅವರನ್ನು melody.eklavya2020@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: **ಮೆಲ್ವಿನ್ ಮೆಂಡೋನ್ಸಾ** | ಪರಿಶೀಲನೆ: **ನಾಗಮಣಿ ಎಸ್.ಎನ್.**